**ಸೌಭಗತ್ವಸ್ಯ ವಿದ್ವಾನ್—ಸುಭಗಸ್ಯ ಭಾವಃ ಸೌಭಗಂ । ತಸ್ಯ ಭಾವಃ ।** ಎಂದರೆ ಸಕಲಸೌಭಾಗ್ಯ ಸಂಪತ್ತುಗಳನ್ನೂ ತಿಳಿದವನಾಗಿ ; **ಜಾತವೇದಾಃ** ಇತ್ಯಾದಿ ವಿಶೇಷಣಗಳಿಂದ ಅಗ್ನಿಯ ಸರ್ವಜ್ಞತ್ವವನ್ನು ವರ್ಣಿಸಿರುವುದರಿಂದ ಯಜ್ಞಕರ್ತರಶ್ರದ್ಧಾ ಭಕ್ತಿಗಳನ್ನೂ, ಅವರ ಕರ್ಮವ್ಯತತ್ಪರತೆಯನ್ನೂ ಆಯಾ ಸತ್ಕರ್ಮಗಳಿಗೆ ತಕ್ಕ ಫಲಗಳನ್ನೂ ಸಂಪೂರ್ಣವಾಗಿ ತಿಳಿದು ಸಕಲ ಸೌಭಾಗ್ಯ ಸಂಪತ್ತುಗಳನ್ನು ಅವರಿಗೆ ಒದಗಿಸುತ್ತಾ.

**ಅಸ್ಮಾಕಮಾಯುಃ ಪ್ರ ತಿರ—** ನಮ್ಮ ಆಯುಸ್ಸನ್ನು ವೃದ್ಧಿಯಾಗುವಂತೆ ಮಾಡು. **ಪ್ರ ತಿರ** ಶಬ್ದಕ್ಕೆ **ಪ್ರವರ್ಧಯ** ಎಂದು ನಿರುಕ್ತಕಾರರು ವಿವರಿಸಿ (ನಿ. ೧೦-೪೦) ಋಕ್ಸಂಹಿತೆಯು —

**ಅಸುನೀತೇ ಮನೋ ಅಸ್ಮಾಸು ಧಾರಯ ಜೀವಾತವೇ ಸು ಪ್ರ ತಿರಾ ನ ಆಯುಃ ।**

( ಋ. ಸಂ. ೧೦-೫೯-೫ )

ಎಂಬ ಋಕ್ಕನ್ನು ಉದಹರಿಸಿ ತೋರಿಸುತ್ತಾರೆ. ಇದರಂತೆಯೇ ಅನೇಕಸಂದರ್ಭಗಳಲ್ಲಿ ನಮ್ಮ ಆಯುಸ್ಸನ್ನು ಬೆಳೆಸು, ನಾವು ದೀರ್ಘಕಾಲ ಜೀವಿಸುವಂತಾಗಲಿ ಎಂದರ್ಥವನ್ನು ಕೊಡುತ್ತದೆ. ಅದರಂತೆ ಇಲ್ಲಿಯೂ **ಅಸ್ಮಾಕಮಾಯುಃ ಪ್ರ ತಿರ** ಎಂದರೆ ನಮ್ಮ ಆಯುಸ್ಸು ವೃದ್ಧಿಯಾಗುವಂತೆ ಮಾಡು ಎಂದರ್ಥ.

**ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ ಪೃಥಿವೀ ಉತ ದ್ಯೌಃ**— ಈ ದೇವತೆಗಳೆಲ್ಲರೂ ಸಹ ಅಗ್ನಿಯಿಂದ ಅನುಗೃಹೀತವಾದ ನಮ್ಮ ಸೌಭಾಗ್ಯಸಂಪತ್ತುಗಳನ್ನು ಬೆಳಿಸಲಿ, ಪೂಜ್ಯವಾದುದನ್ನಾಗಿ ಮಾಡಲಿ. ಅವು ನಮ್ಮ ಭಾಗಕ್ಕೆ ಶ್ರೇಯಸ್ಕರಗಳಾಗುವಂತೆ ಮಾಡಲಿ. ಇದು ಈ ಸೂಕ್ತದ ಕೊನೆಯ ಪ್ರಾರ್ಥನೆ. ಸೂಕ್ತದ ಆದಿಯಿಂದ ಇಲ್ಲಿಯ ವರೆಗೆ ಅಗ್ನಿದೇವತಾಕವಾಗಿದ್ದು, ಸೂಕ್ತದ ಕೊನೆಯ ಅರ್ಧದಲ್ಲಿ ಈ ವಿಧವಾಗಿ ಸರ್ವದೇವತಾಕವಾದ ಪ್ರಾರ್ಥನೆಯು ಕುತ್ಸಋಷಿಗಳ ಕೃತಿಯ ವೈಶಿಷ್ಟ್ಯವು. ಈ ವೈಶಿಷ್ಟ್ಯವು ಭಾರದ್ವಾಜ, ಗೃತ್ಸಮದ ಇತ್ಯಾದಿ ಋಷಿಗಳ ಕೃತಿಗಳಲ್ಲೂ ಕಂಡು ಬರುತ್ತದೆ. ಇದಕ್ಕೆ **ಉದರ್ಕ**ವೆಂದು ಪಾರಿಭಾಷಿಕ ವಚನವು ಪ್ರಸಿದ್ಧವಾಗಿದೆ. ಕುತ್ಸಋಷಿಗಳ **ಉದರ್ಕ**ವನ್ನು ಬೃಹದ್ದೇವತೆಯು ಈ ರೀತಿ ಪ್ರಶಂಸಿಸಿದೆ

**ಇಮಂ ಕುತ್ಸ ಆಂಗಿರಸೋ ದದರ್ಶ ಜಾತವೇದಸ್ಯಂ ಜಗಾದ ಷೋಳಶರ್ಚಂ ।**
**ಪೂರ್ವೋ ದೇವಾ ಇತ್ಯೃಚೋ ದೇವದೇವಾಸ್ತ್ರಯಃ ಪಾದಾ ಉತ್ತಮಾಯಾ ಸ್ತುತೋಽರ್ಧಂ ॥**

**ತಸ್ಯೈವ ವಾ ಯಸ್ಯ ತತ್ಪೂರ್ವಸೂಕ್ತಂ ಮಿತ್ರಾದಿಭ್ಯೋ ವಾತ್ರ ಷಡ್ಭಃ ಪ್ರಕೃತಾಭ್ಯಃ ।**
**ಅಂತ್ಯೋಽರ್ಧರ್ಚಸ್ತು ವಾ ಷಣ್ಣಾಂ ಸ್ತುತಾನಾಂ ಪೂರ್ವೋ ದೇವಾಃ ಪಾದೈಸ್ತು ತ್ರಿಭಿಃ ಸ್ತುತಾಃ॥**

**ಭರದ್ವಾಜೇ ಗೃತ್ಸಮದೇ ವಸಿಷ್ಠೇ ನೋಧಸ್ಯಗಸ್ತ್ಯೇ ವಿಮದೇ ನಭಾಕೇ ।**
**ಕುತ್ಸೇ ನೋದರ್ಕಾ ಬಹುದೈವತೇಷು ತಥಾ ದ್ವಿದೇವೇಷು ಸಮಾನಧರ್ಮಿಣಃ ॥**

( ಬೃಹದ್ದೇವತಾ III. 126—128 )

ಕುತ್ಸ ಆಂಗಿರಸನು ಈ ಸೂಕ್ತದ ( ೧-೯೪ ) ನವನ್ನು ಪಡೆದು ಹದಿನಾರು ಋಕ್ಕುಗಳುಳ್ಳ ಈ ಸೂಕ್ತವನ್ನು ಜಾತವೇದಸ್ಸಿನ ಪರವಾಗಿ ಪಠಿಸಿದನು. **ಪೂರ್ವೋ ದೇವಃ** ಎಂಬ ಎಂಟನೇ ಋಕ್ಕಿನ ಮೊದಲು ಮೂರು ಪಾದಗಳೂ, ಕೊನೆಯ ಋಕ್ಕಿನ ಉತ್ತರಾರ್ಧವೂ ಬಹುದೇವತಾಕವಾಗಿದೆ. ಭರದ್ವಾಜ, ಗೃತ್ಸಮದ. ವಸಿಷ್ಠ, ನೋಧಾಃ, ಅಗಸ್ತ್ಯ, ವಿಮದ, ನಭಾಕ ಇವರ ಸೂಕ್ತಗಳಲ್ಲಿಯೂ **ಉದರ್ಕ**ಗಳಿದ್ದರೂ ಸಹ ಅವು ಬಹುದೇವತಾಕವಾಗಿರಲಿ, ದ್ವಿದೇವತಾಕವಾಗಿರಲಿ ಕುತ್ಸಋಷಿಯ **ಉದರ್ಕ**ದಲ್ಲಿರುವ ಪಲ್ಲವಿಯ ಸಮಾನ ಧರ್ಮವನ್ನು ಹೊಂದಿರುವುದಿಲ್ಲ, ಎಂದು ಕುತ್ಸಋಷಿಯ ಕೃತಿಯಲ್ಲಿ ವೈಶಿಷ್ಟ್ಯವನ್ನು ತೋರಿಸಲಾಗಿದೆ.

ಒಟ್ಟಿನಲ್ಲಿ ಎಂಟು ಋಷಿಗಳ ಕೃತಿಗಳಲ್ಲಿ ಈ ವಿಧವಾದ **ಉದರ್ಕವು** ಸೂಕ್ತಗಳ ಕೊನೆಯಲ್ಲಿ ಪಠಿತವಾಗಿವೆ. ಆದರೆ ಯಾವ ಋಷಿಯ ಸೂಕ್ತದ ಕೊನೆಯ ಅರ್ಧವೂ ಬಹುದೇವತಾಕವಾಗಿಲ್ಲ. ಈ ಅಂಶವನ್ನು ಉದಾಹರಣೆಗಳೊಂದಿಗೆ ಮುಂದಿನ ಸೂಕ್ತದ ವಿವರಣೆಯಲ್ಲಿ ವಿಶದವಾಗಿ ವಿಮರ್ಶಿಸಲಾಗುವುದು

ವ್ಯಾಕರಣಪ್ರಕ್ರಿಯಾ

**ಸೌಭಗತ್ವಸ್ಯ**—ಸುಭಗಸ್ಯ ಭಾವಃ ಸೌಭಗಮ್. **ಸುಭಗಾನ್ಮಂತ್ರೇ**—ಎಂದು ಉದ್ಗಾತ್ರಾದಿಯಲ್ಲಿ ಪಾಠ ಮಾಡಿರುವುದರಿಂದ ಭಾವಾರ್ಥದಲ್ಲಿ **ಘಞ್** ಪ್ರತ್ಯಯ. ಞಿತ್ತ್ವಾದುದರಿಂದ ಆದಿವೃದ್ಧಿಬರುತ್ತದೆ. ಸೌಭಗವೆಂದರೇ ಭಾವಾರ್ಥ ತೋರುತ್ತಿರುವಾಗ ತಿರುಗಿ ಭಾವಾರ್ಥಕ ತ್ವಪ್ರತ್ಯಯವನ್ನು ಸೌಭಗ ಶಬ್ದದ ಮೇಲೆ ಛಾಂದಸವಾಗಿ ಸ್ವೀಕರಿಸಬೇಕು. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ತಿರ**—ಪ್ರ ಪೂರ್ವವಾದ ತಿರ ಧಾತುವು ವೃದ್ಧ್ಯರ್ಥದಲ್ಲಿದೆ. ಲೋಟ್. ಮಧ್ಯಮಪುರುಷ, ಏಕವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

**ಮಮಹಂತಾಮ್**—ಮಹ ಪೂಜಾಯಾಂ ಧಾತು. ಭ್ವಾದಿ. ಲೋಟ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ. **ಝೋಂತಃ** ಎಂಬುದರಿಂದ ಅಂತಾದೇಶ **ಆಮೇತಃ** (ಪಾ. ಸೂ· ೩-೪-೯೦) ಎಂಬುದರಿಂದ ಲೋಟಿನಲ್ಲಿ ಬಂದ ಏತ್ವಕ್ಕೆ ಆಮಾದೇಶ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ. ಶ್ಲೌ ಎಂಬುದರಿಂದ **ಧಾತು**ವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ತುಜಾದಿಯಲ್ಲಿ ಸೇರಿರುವುದರೀದ **ತುಜಾದೀನಾಂ ದೀರ್ಘೋಽಭ್ಯಾಸಸ್ಯ** (ಪಾ. ಸೂ. ೬-೧-೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. || ೧೬ ||

೯೪ ನೇ ಸೂಕ್ತವು ಸಮಾಪ್ತವಾಗಿದೆ.



ವೇದಾರ್ಥಸ್ಯ ಪ್ರಕಾಶೇನ ತಮೋಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕಶ್ರೀವೀರಬುಕ್ಕಮಹೀಪಾಲಸಾಮ್ರಾಜ್ಯ-
ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಋಕ್ಸಂಹಿತಾಭಾಷ್ಯೇ ಪ್ರಥಮಾಷ್ಟಕೇ ಷಷ್ಠೋಽಧ್ಯಾಯಃ ಸಮಾಪ್ತಃ

ಶ್ರೀಃ

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ಪ್ರಥಮಾಷ್ಟಕದಲ್ಲಿ
ಆರನೆಯ ಅಧ್ಯಾಯವು ಸಮಾಪ್ತವಾದುದು.

———:o:———

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥